# ಕರ್ನಾಟಕ ವಿಧಾನ ಪರಿಷತ್ತು

## 140ನೇ ಅಧಿವೇಶನ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 218

ಸದಸ್ಯರ ಹೆಸರು : **ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)**

ಉತ್ತರಿಸುವ ಸಚಿವರು : ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

ಉತ್ತರಿಸುವ ದಿನಾಂಕ : 04/03/2019

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ಪಣಸೂಲಿಯಿಂದ ಬೈಲ್‌ಪಾರ್ ವರೆಗಿನ ರಾಮ-ಲಕ್ಷ್ಮಣ ಗೌಳಿವಾಡಾ ರಸ್ತೆ ನಿರ್ಮಾಣವಾಗಿ 3 ತಿಂಗಳಲ್ಲೇ ಹದಗೆಟ್ಟಿದ್ದು ಸದರಿ ರಸ್ತೆ ನಿರ್ಮಾಣದಲ್ಲಿ ಕೋಟ್ಯಾಂತರ ರೂಪಾಯಿ ಅವ್ಯವಹಾರ ಆಗಿದ್ದು, ಇದು ಸರ್ಕಾರದ ಗಮನಕ್ಕೆ ಬಂದಿರುತ್ತದೆಯೇ; (ವಿವರ ನೀಡುವುದು) | ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲೂಕಿನ ಪ್ರಧಾನಿ ಗ್ರಾಮ ಪಂಚಾಯತ ವ್ಯಾಪ್ತಿಯ ರಾ.ಹೆ.-46 ರಿಂದ ಜನತಾ ಕಾಲೋನಿ ವ್ಹಾಯಾ ಗೌಳಿವಾಡಾ ರಾಮಲಕ್ಷ್ಮಣ ಮಠ ಮಾರ್ಗವಾಗಿ ಫಣಸೋಲಿ ಕೂಡು ರಸ್ತೆ ಕಿ.ಮೀ. 7.80 ರ ವರೆಗೆ ಅಭಿವೃದ್ಧಿ. ಕಾಮಗಾರಿಯನ್ನು ರೂ 350.00 ಲಕ್ಷ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಂಡಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ರೂ.64.52ಲಕ್ಷ ವೆಚ್ಚ ಭರಿಸಲಾಗಿದೆ.<br><br>ಕಿ.ಮೀ 0.30 ರಲ್ಲಿ ಸೇತುವೆ ಕಾಮಗಾರಿಯನ್ನು ಪೂರ್ಣಗೊಳಿಸಬೇಕಾಗಿದೆ. ಕಾಮಗಾರಿ ಪ್ರಗತಿಯಲ್ಲಿರುವಾಗ ಗುಣಮಟ್ಟ ಕಾಯ್ದುಕೊಂಡು ಕಾಮಗಾರಿ ನಿರ್ವಹಿಸಲಾಗಿದೆ. ಅಗಸ್ಟ 2019 ರಿಂದ ನವೆಂಬರ್ 2019 ರವರೆಗೆ ಈ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದಾಗಿ ಸಿ.ಡಿ ಗಳ ಪಕ್ಕದಲ್ಲಿ ರಭಸವಾಗಿ ನೀರು ಹರಿದು ಸಿ.ಡಿ ಗಳ ಅಪ್ರೋಚ್ ರಸ್ತೆಯು ಹಾಳಾಗಿರುತ್ತದೆ. ಇದನ್ನು ಕೂಡಲೇ ಸರಿಪಡಿಸುವಂತೆ ಗುತ್ತಿಗೆದಾರರಿಗೆ ಈಗಾಗಲೇ ಸೂಚನೆಗಳನ್ನು ನೀಡಲಾಗಿದ್ದು, ಸರಿಪಡಿಸಲು ಗುತ್ತಿಗೆದಾರರು ಕ್ರಮವಹಿಸಿರುತ್ತಾರೆ. ಸಿ.ಡಿ ಭಾಗದ ಹೊರತಾಗಿ ಉಳಿದ ಎಲ್ಲಾ ಕಡೆ ರಸ್ತೆಯು ಸುಸ್ಥಿಯಲ್ಲಿರುತ್ತದೆ.<br><br>ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಅವ್ಯವಹಾರ ಜರುಗಿರುವುದಿಲ್ಲ. |
| ಆ) | ಸದರಿ ರಸ್ತೆ ನಿರ್ಮಾಣಕ್ಕೆ ಮಂಜೂರಾಗಿರುವ ಅನುದಾನವೆಷ್ಟು; ಸದರಿ ರಸ್ತೆ ನಿರ್ಮಾಣ ಮಾಡಿರುವ ಗುತ್ತಿಗೆದಾರರ ವಿವರ ಹಾಗೂ ಇದಕ್ಕೆ ಸಂಬಂಧಿಸಿದ ಅಧಿಕಾರಿ ವರ್ಗದವರ ವಿವರ ನೀಡುವುದು; | (1) 2016-17ನೇ ಸಾಲಿನ ಸದರಿ ರಸ್ತೆ ಕಾಮಗಾರಿಗೆ ಅಪೆಂಡಿಕ್ಸ್-ಇ ನಲ್ಲಿ ರೂ.350.00ಲಕ್ಷ ಮಂಜೂರಾತಿ ನೀಡಲಾಗಿರುತ್ತದೆ.<br><br>(2) ಸದರಿ ಕಾಮಗಾರಿಯ ಗುತ್ತಿಗೆಯನ್ನು ಶ್ರೀ ರಮೇಶ ಎಸ್. ನಾಯಕ್ (ಆರ್.ಎಸ್.ನಾಯಕ & ಕಂಪನಿ) ತೊರ್ಕೆ, ಕುಮಟಾ ಉತ್ತರ ಕನ್ನಡ ಜಿಲ್ಲೆ ಇವರಿಗೆ ವಹಿಸಲಾಗಿದೆ.<br><br>(3) ಈ ಕಾಮಗಾರಿಯ ಅನುಷ್ಠಾನದ ಅವಧಿಯಲ್ಲಿ ಕಾರ್ಯನಿರ್ವಹಿಸಿದ ಅಧಿಕಾರಿಗಳ ವಿವರ ಕೆಳಕಂಡಂತಿದೆ:<br>(i) ಕಾರ್ಯನಿರ್ವಾಹಕ ಇಂಜಿನೀಯರರು:<br>ಶ್ರೀ ವೀ.ವೀ ಸಜ್ಜನರ (ನಿವೃತ್ತ)<br>ಶ್ರೀ ಆರ್.ಎಚ್. ಕುಲಕರ್ಣಿ(ಪ್ರಭಾರಿ)<br>ಶ್ರೀ. ಕೃಷ್ಣಾರೆಡ್ಡಿ ಎಚ್ ಎಂ (ಹಾಲಿ)<br><br>(ii) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು:<br>ಶ್ರೀ ಉದಯ ಡಿ ಛಬ್ಬಿ<br>ಶ್ರೀ ಆರ್.ಎಚ್. ಕುಲಕರ್ಣಿ(ಪ್ರಭಾರಿ)<br>ಶ್ರೀ ವಿಜಯಕುಮಾರ ಹೆಚ್ (ಹಾಲಿ) |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| | | (iii) ಸಹಾಯಕ ಇಂಜಿನೀಯರರು<br>ಶ್ರೀ ರಾಘವೇಂದ್ರ ದೊಡ್ಡಮನಿ<br>ಶ್ರೀ ಅರುಣ ಡಿ (ಹಾಲಿ) |
| ಇ) | ಈ ರೀತಿ ಸರ್ಕಾರದ ಕೋಟ್ಯಾಂತರ ರೂಪಾಯಿ ಅವ್ಯವಹಾರ ಅಗಿರುವುದಕ್ಕೆ ಸಂಬಂಧಿಸಿದವರ ವಿರುದ್ಧ ಸರ್ಕಾರ ಕೂಡಲೇ ಶಿಸ್ತಿನ ಕ್ರಮಕೈಗೊಳ್ಳುವುದೇ; ಇಲ್ಲವೇ ಉನ್ನತ ತಂಡದಿಂದ ತನಿಖೆ ಮಾಡಿಸಿ ಕ್ರಮ ಕೈಗೊಳ್ಳುವುದೇ; (ಸವಿಸ್ತಾರ ವರದಿ ನೀಡುವುದು) | ಈ ಕಾಮಗಾರಿಯನ್ನು ಗುಣಮಟ್ಟ ಕಾಯ್ದುಕೊಂಡು ನಿರ್ವಹಿಸಲಾಗುತ್ತಿದೆ. ಆದರೆ ಆಗಸ್ಟ್ 2019 ಮತ್ತು ಅಕ್ಟೋಬರ್ 2019ರ ಮಾಹೆಯಲ್ಲಿ ಉಂಟಾದ ನೆರಹಾವಳಿ ಹಾಗೂ ಅತಿವೃಷ್ಟಿಯಿಂದ ಸದರಿ ರಸ್ತೆಯ ಸಿಡಿಗಳು ಹಾಳಾಗಿದ್ದು, ಕಾಮಗಾರಿಯು ಇನ್ನೂ ಪ್ರಗತಿಯಲ್ಲಿರುತ್ತದೆ. ಇವುಗಳನ್ನು ಸರಿಪಡಿಸಲು ಗುತ್ತಿಗೆದಾರರಿಗೆ ನಿರ್ದೇಶನ ನೀಡಲಾಗಿರುತ್ತದೆ. |
| ಈ) | ಸರ್ಕಾರ ಈ ವಿಷಯವನ್ನು ಗಂಭೀರವಾಗಿ ಪರಿಗಣಿಸುವುದೇ? (ವಿವರ ನೀಡುವುದು) | |

ಸಂ:ಲೋಇ/207/ಐಎಫ್ಎ/2020 (ಇ-ಕಛೇರಿ)

(ಗೋವಿಂದ ಎಂ. ಕಾರಜೋಳ)
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು